# ಹೊಸ ಬಾಳಿನ
# ಹಾಡನು
# ಹಾಡೋಣ



ಸ್ನೇಹಾ ಪ್ರಕಾಶನ

# ಹೊಸ ಬಾಳಿನ ಹಾಡನು
# ಹಾಡೋಣ





ಸ್ನೇಹಾ ಪ್ರಕಾಶನ
ನಂ. 3312 ರೈಲ್ವೆ ಪಾರಲಲ್ ರೋಡ್,
ವಿಜಯನಗರ 2ನೇ ಹಂತ ಬೆಂಗಳೂರು—40.

*HOSA BALINA HADANU HADONA- A collecton of Kannada poems Publihed by Sneha Prakshna No. 3312, Raiway paralell Road, R.P.C. lay-out Vijyanagar, Bangaore-560 040*



ಬೆಲೆ: 2-25

ಪ್ರತಿಗಳು ; 1,000



ಅಧಿಕೃತ ಮಾರಾಟಗಾರರು
**ಕ್ರಿಯಾ ಪ್ರಕಾಶನ ಪ್ರೈ., ಲಿಮಿಟೆಡ್**
ಶೋಭ ಲಾಡ್ಜ್ ಕಾಂಪ್ಲೆಕ್ಸ್
5ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು-9

ಮುದ್ರಣ ; ಗೋಲ್ಡನ್ ಪ್ರಿಂಟರ್ಸ್

# ಪರಿವಿಡಿ

## ಪ್ರಕಾಶಕರ ನುಡಿ

ಶತಮಾನಗಳಿಂದ ಆರ್ಥಿಕ, ಸಾಮಾಜಿಕ, ದಬ್ಬಾಳಿಕೆಯ ಕ್ರೌರ್ಯಕ್ಕೆ ಬಲಿಯಾಗಿ ತಮ್ಮೊಳಗೆ ಅದುಮಿಟ್ಟುಕೊಂಡಿದ್ದ, ಈ ಕ್ರೂರವ್ಯವಸ್ಥೆಯಲ್ಲಿ ಶೋಷಿತ ಜನರು ತನ್ನೆಲ್ಲಾ ಭಟನೆಯನ್ನು ಹಾಡಿನ ಮೂಲಕ ಗಟ್ಟಿಯಾಗಿ, ರೋಷವಾಗಿ. ಆವೇಶದಿಂದ, ಆಕ್ರೋಶದಿಂದ ಘರ್ಜಿಸುತ್ತಾ ಬೀದಿ ಬೀದಿಯಲ್ಲಿ ನಮ್ಮನ್ನು ಬದುಕಲು ಬಿಡಿ, ಊಟ ಕೊಡಿ ಎಂದು ಹಾಡುಗಳ ಮೂಲಕ ತಮ್ಮ ಸವಲತ್ತುಗಳನ್ನು ಕೇಳುವುದರಲ್ಲಿ ಕವಿತೆಗಳು ಕೂಡ ಪಾತ್ರ ವಹಿಸುತ್ತದೆ.

ಶೋಷಿತರ ಎದೆಯ ನೊವುಗಳಿಂದ ಈ ಹೋರಾಟದ ಹಾಡುಗಳು ಮೂಡ ಬಂದಿವೆ ನೊಂದು ಬೆಂದವರ ಜನರೊಂದಿಗೆ ಬೆರೆತು ಗಟ್ಟಿಯಾಗಿ, ಲಯಬದ್ಧವಾಗಿ, ಸಮೂಹವಾಗಿ ಹಾಡುಗಳನ್ನು ಹಾಡುತ್ತ ಎಲ್ಲಾ ವಿಭಾಗದ ಶೋಷಿತರನ್ನು ಎಚ್ಚರಿಸಿ, ಪ್ರಜ್ಞಾವಂತರನ್ನಾಗಿಸುವತ್ತಾ, ಈ ಹಾಡುಗಳು ಪೂರಕವಾಗಲಿ ಎಂಬುದು ನಮ್ಮ ಎದೆಯಾಳದ ಆಸೆ.

ಈ ಕವಿತೆಗಳನ್ನು ಕೆಲವೊಂದನ್ನು ಪರ್ಚಮ್ (ಹಿಂದಿ) ನಿಂದ ಅನುವಾದಿಸಲಾಗಿದೆ, ಮಿಕ್ಕ ಕೆಲವುಗಳನ್ನು ಸಮುದಾಯದ ಹಾಡುಗಳ ಪುಸ್ತಕದಿಂದ ಹಾಗೇ ಸಾವಿರಾರು ನದಿಗಳಿಂದ ಮತ್ತು ಹೋರಾಟದ ಹಾಡುಗಳ ಪುಸ್ತಕದಿಂದ ಆಯ್ದು ಪ್ರಕಟಿಸಿದ್ದೇವೆ.

ಈ ಕವಿತೆಯನ್ನು ಪ್ರಕಟಿಸಲು ಅನುಮತಿ ಕೊಟ್ಟಂತ ಕವಿಗಳಾದ ಸಿದ್ದಲಿಂಗಯ್ಯ ರಾಹು, ಕೆ, ರಾಮಯ್ಯ, ಜನಕರಾಜ್, ಚೆನ್ನಬಸವ ಇವರಿಗೆ ಕೃತಜ್ಞತೆಗಳು.

ಪರ್ಚಮ್‌ನಿಂದ ಹಾಡುಗಳನ್ನು ಕನ್ನಡಕ್ಕೆ ಅನುವಾದ ಮಾಡಿಕೊಟ್ಟಂತಹ ವೇದರಾಜ್ ಮತ್ತು ಪರ್ಚಮ್‌ನಿಂದ ಅನುವಾದ ಹಾಡುಗಳಿಗೆ ರಾಗವನ್ನು ಸಂಯೋಜಿಸಿರುವ ನಾಟಕಕಾ ಬಸವಲಿಂಗಯ್ಯನವರಿಗೂ ನಾನು ತುಂಬಾ ಅಭಾರಿಯಾಗಿದ್ದೇನೆ.

ಶ್ರೀದರ್‌ಮೂರ್ತಿ
ಪ್ರಕಾಶಕರ ಪರವಾಗಿ

# ಹೊಸ ಬಾಳಿನ ಹೂಗಳು

ಸ್ವಾತಂತ್ರ್ಯ ಸಮರದಲಿ ಅರಳಿದ ಹೂಗಳೆ
ನಿಮಗೆ ವಂದನೆ ವೀರ ವಂದನೆ
ನಿಮಗೆ ವಂದನೆ ಕೆಂಪು ವಂದನೆ

ಕತ್ತಲು ತುಂಬಿದ ಆಗಸದಲ್ಲಿ
ತಾರೆಗಳಂತೆ ಹೊಳೆಯುತಲಿರುವಿರಿ
ಹೋರಾಡುವ ನಮಗೆ ಸ್ಫೂರ್ತಿಯ ನೀಡಿ

ಲಕ್ಷ ಲಕ್ಷ ಜನ ದುಡಿವವರ
ರಕ್ತ ಹೀರುತಿದೆ ಘೋರ ಸಮಾಜ
ಜನತೆಯು ಸಮರದ ಶಕ್ತಿಯಿಂದಲೇ
ಕಿತ್ತೆಸೆಯುವ ಬನ್ನಿ ಈ ಕ್ರೂರ ವ್ಯವಸ್ಥೆಯ

ಸ್ವಾತಂತ್ರ್ಯ ಸಮರದ ಹೋರಾಟದಲಿ
ಹುತಾತ್ಮರಾದ ವೀರರು ಎಷ್ಟೋ
ಜನತೆಯು ಕನಸಿನ ಬಾಗಿಲು ತೆರೆದು
ಹೊಸ ಬಾಳಿನ ಹೂಗಳು ಅರಳುವವು
ಬಾ ಗೆಳೆಯ ಇದು ಸತ್ಯ ಕೇಳೋ ಗೆಳೆಯ

## ಕತ್ತಲ ಪರದೆಯು ಸೀಳುತ್ತಿದೆ

ಕ್ರಾಂತಿ ಸೇನೆ ಮುನ್ನುಗ್ಗುತಿದೆ ಕೆಂಪು ಸೇನೆ ಮುನ್ನುಗ್ಗುತ್ತಿದೆ
ರೈತ ಬಂಧುಗಳೆ ಎದ್ದೇಳಿ, ಶ್ರಮಿಕ ಬಂಧುಗಳೆ ಎದ್ದೇಳಿ
ನಿದ್ರೆಯಲ್ಲಿರುವ ಶೋಷಿತ ಜನರೆ ಎದ್ದೇಳಿ ಎದ್ದೇಳಿ ಎದ್ದೇಳಿ

ರೈತ ಬಂಧುಗಳು ರಕ್ತ ಚೆಲ್ಲಿದ ರಣಭೂಮಿಯಲಿ
ಬಿರುಗಾಳಿ ಬೀಸಿದ ತೆಲಂಗಾಣಾದ ಹೊಸ ಹಾದಿಯಲಿ
ಧಗ್ ಧಗಿಸಿದ ಆ ವೆಣ್ಮಣಿ ವೀರರ ಬೆಳಕಿನ ಹಾದಿಯಲಿ
ಧೀರ ಹೆಜ್ಜೆಯಲಿ ವಿಪ್ಲವಗಾನವ ಹಾಡುತಲಿ

ಶೋಷಿತ ವರ್ಗದ ಅಧಿಕಾರದ ಬಲ ಮುರಿಯಲಿವೆ
ಭೂ ಮಾಲಿಕರ ಕ್ರೂರ ಹಿಂಸೆಗಳು ತೊಲಗಲಿವೆ
ನವಯುಗ ಭಾರತ ದೇಶದಲಿ ಕೆಂಪು ಸೂರ್ಯನ ಬೆಳಕಿನಲಿ
ದಾಸ್ಯದ ಸರಪಳಿ ಮುರಿದು ಹೊಸಗಾನವ ಹೊಸೆದು

ಹಿಮಾಲಯದ ಉತ್ತುಂಗದಲಿ ಕೆಂಪು ಬಾವುಟ ಹಾರುತಿವೆ
ಕನ್ಯಾಕುಮಾರಿಯ ಕಡಲ ನೀರಿನಲಿ ಬಿಂಬವು ಮೂಡುತಿವೆ
ಬಂಗಾಳದ ಕಡಲ ತೀರದಿ ಕೆಂಪು ಸೂರ್ಯನ ಉದಯ
ಭಾರತ ದೇಶದ ಕತ್ತಲ ಪರದೆಯು ಸೀಳುತ್ತಿದೆ !

ಸೀಳುತ್ತಿದೆ !!
ಸೀಳುತ್ತಿದೆ !!!

## ಮಾತನಾಡೋಣ

ಮಾತನಾಡೋಣ ಬನ್ನಿ ಮಾತನಾಡೋಣ
ದೇಶದ ಸ್ವಾತಂತ್ರ್ಯ ಕುರಿತು ಮಾತನಾಡೋಣ
ಭಾನಗೇಡಿ ಸರ್ಕಾರ ಕುರಿತು ಮಾತನಾಡೋಣ

ಪರಲೋಕದ ಕನಸಿನ ಕತೆಗಳನು ಬದಿಗಿಟ್ಟು
ಇಹಲೋಕದ ನರಕವನು ಕುರಿತು ಮಾತನಾಡೋಣ
ಕಳೆದಾಯಿತು ಮುಸುಕಿನ ಲಾಭಗಳ ಚರ್ಚೆ
ಹಾಡಹಗಲೆ ತೆರೆವ ವೇಶ್ಯಾ ಬಜಾರ ಕುರಿತು ॥೧॥

ಸಂಸಾರದ ಸಂಗತಿಗಳ ಕುರಿತು ಮಾತನಾಡೋಣ
ಸ್ವರ್ಗದಿಂದ ಅನ್ನ ಬರುವುದೆಂಬ ಕಾಲಹೋಯಿತು
ದಿನನಿತ್ಯದ ಹಸಿವು ಸಂಕಷ್ಟಗಳ ಕುರಿತು ॥೨॥

ತೆರೆ ಎಳೆಯೋಣ ಬನ್ನಿ ಧರ್ಮದ ಭ್ರಮೆಗಳಿಗೆ
ವರ್ತಮಾನ ವಿಜ್ಞಾನ ಕುರಿತು ಮಾತಾಡೋಣ
ಕ್ರೂರ ಅರಸಿನಽಽ ದೀನ ಪ್ರಜೆಗಳ ಕುರಿತು
ಈ ಪುರಾತನ ಸನಾತನ ಪರಂಪರೆಗಳ ಕುರಿತು ॥೩॥

ಕಿರೀಟ ಸಿಂಹಾಸನಗಳ ಹೊಗಳಿಕೆ ಕೊನೆಗೊಂಡಿತು
ವಂಶಪರಂಪರೆಯ ಆಡಳಿತದ ಕುರಿತು
ಕುಸಿಯುತಿಹ ಅರಮನೆಯ ಗುಣಗಾನವೇತಕೆ
ಮಜ್ದೂರ ಪಿಪಾಸೆಯ ಕುರಿತು ಮಾತಾಡೋಣ

# ಕಾಮ್ರೇಡ್ ಲೆನಿನ್ ಕರೆಗೆ

Through the winters, cold and famine
From the fields and from the towns
At the call of Comrade Lenin
There arose the Partisan

ಹಸಿವು ಚಳಿ ಸಾವಿನೊಡನೆ ಸೆಣಸಿ
ಹಳ್ಳಿ ಪೇಟೆಯು ಸುತ್ತಿ ಬಳಸಿ
ಕಾಮ್ರೇಡ್ ಲೆನಿನ್ ಕೊಟ್ಟ ಕರೆಗೆ
ಮುಕ್ತಿಯಾ ಸೇನೆ ಸಾಗಿತು ಮುಂದೆ

They destroyed the white guard forces
and to hell the bandits they hurled
And an Pacific Ocean
The Workers Flag unfurled

ಶತ್ರು ಸೇನೆ ನುಚ್ಚುನೂರು ಮಾಡಿ
ನರಕದ ದ್ವಾರಕೆ ಕಿತ್ತೆಸೆದು
ಪ್ರಶಾಂತ ಸಾಗರದಲೆಗಳ ಮೇಲೆ
ಹಾರಾಡಿತು ಕೆಂಬಾವುಟ

# ಇನ್ನೆಲ್ಲಿಯ ಸಹನೆ

ಎಲ್ಲಿದೆ ಇನ್ನೆಲ್ಲಿಯ ಸಹನೆ
ವಿಶ್ವದ ಹೆಬ್ಬಾಗಿಲಲಿ ಯುದ್ಧದಾ ಘರ್ಜನೆ
ಎಲ್ಲಿದೆ ಇನ್ನೆಲ್ಲಿಯ ಸಹನೆ?
ಮುಕ್ತ ದಿನ ಮುಕ್ತ ಪ್ರಾಣ ಮುಕ್ತ ನಮ್ಮ ಉಸಿರು
ನಾಗರಿಕತೆಯ ಶತ್ರುಗಳಿಗೆ ನೆತ್ತರಿನ ದಾಹವು
ಮಾಡುತಿರುವ ಯುದ್ಧ ಕ್ರೋರ ಯುದ್ಧದಾ ಘೋಷಣೆ
ಎಲ್ಲಿದೆ ಇನ್ನೆಲ್ಲಿಯ ಸಹನೆ?

ಬೇಡ ಯುದ್ಧ ಬೇಡ ಯುದ್ಧ, ಎತ್ತಿ ಶಾಂತಿಯ ಧ್ವಜ
ಒಕ್ಕೊರಲಲಿ ಎತ್ತಿ ಕೂಗಿ ಮತ್ತೆ ಬೇಡ ವಿನಾಶ
ಬೇಡ ಮತ್ತೆ ನಾಗಸಾಕಿ ಹಿರೋಷೀಮಾ ಮತ್ತೆ ಬೇಡ
ಎಲ್ಲಿದೆ ಇನ್ನೆಲ್ಲಿಯ ಸಹನೆ?

# ಒಗ್ಗಟ್ಟಿನ ಹಾಡು

ಶಾಂತಿಯ ರಕ್ಷಕರು ನಾವೆಲ್ಲಾ ಒಂದೇ–ಒಂದೇ।
ದಮನವ ಎದುರಿಸುವ ನಾವೆಲ್ಲಾ ಒಂದೇ–ಒಂದೇ॥

ಕೊರಿಯಾದಲಿ ನಾವು ಹಿಂದೂಸ್ಥಾನದಿ ನಾವು
ರಷ್ಯಾದಲಿ ನಾವು ಚೀನ ಜಪಾನದಿ ನಾವು
ಅಮೆರಿಕಾದಲಿ ನಾವು ಇಂಗ್‌ಲಂಡಿನಲಿ ನಾವು
ಜಗದ ಪ್ರತಿ ನಿಜ ಮನುಜನಲಿ ಇರುವೆವು ನಾವು
ಬಿಳಿಯರೇನು ಕರಿಯರೇನು, ನಾವೆಲ್ಲಾ ಒಂದೇ–ಒಂದೇ॥

ಹಸುಳೆಯ ನಗುವನು ನಾವು ಮಾರುವುದಿಲ್ಲ
ತಾಯಂದಿರ ಆಕಾಂಕ್ಷೆಗಳ ನಾವು ಮಾರುವುದಿಲ್ಲ
ಆಟಂಬಾಂಬಿನ ಸಂಪತ್ತಿನ ಬಜಾರದಲ್ಲಿ
ನಾವು ಮನುಜರ ಉಸಿರ ಮಾರುವುದಿಲ್ಲ
ಸ್ವಾತಂತ್ರ್ಯದಾ ಪ್ರೇಮಿಗಳು ನಾವೆಲ್ಲಾ ಒಂದೇ–ಒಂದೇ॥

ತಾಜಮಹಲು ಅಜಂತಾಗಳ ಶಿಲ್ಪಿಗಳು ನಾವು
ಪ್ಯಾರಿಸ್ ಮತ್ತು ರೋಮಿನ ಶೃಂಗಾರ ನಾವು
ನಗುವ ಹಾಕುವ ಗಿರಣಿಗಳ ಹಾಡು ನಾವು
ನಡೆವ ಅಲೆವ ಹಾದಿಗಳ ವೇಗವು ನಾವು
ಜೀವನದ ಬೆಳಕುಗಳು ನಾವೆಲ್ಲಾ ಒಂದೇ–ಒಂದೇ॥

ಈ ಕೇರಿಗಳನು ಬೆಳಗಿಸೋಣ ಸದಾ
ಈ ಹೊಲಗಳನು ನಳನಳಿಸೋಣ ಸದಾ
ಎತ್ತಿ ತವಾಚೆಯಾ, ಹಾಡು ಶಾಂತಿಯ ಹಾಡು
ಬಾಳಿನ ಗೀತೆಯ ಹಾಡು ಸದಾ
ಸಾವಿನಲ್ಲೂ ನಗುವವರು ನಾವೆಲ್ಲಾ ಒಂದೇ–ಒಂದೇ॥

## ಏನು ನಡೆದಾದೋ

ಏನು ನಡೆದಾದೋ ಇನ್ನೇನು ನಡಿತಾದೋ।
ಬರದ ಬವಣೆಗೆ ಬಲಿಯಾದ ಜನ ಮನೆ ಮಾರು ಮಾರ್‍ಯಾರೋ।
ಬರದ ಸಿಡಿಲಿಗೆ ಬಲಿಯಾದ ಜನ ಸುಡುಗಾಡು ಸೇರ್‍ಯಾರೋ॥
ಕುಡಿಯುವ ನೀರಿಗಾಗಿ ಬಾಯಿ ಬಿಡುವಂಥ ಕೆಡುಗಾಲ ಬಂತಲ್ಲೋ।
ಕೂಳಿಗಿಲ್ಲದೆ ಸಾಯುವಂಥ ಕಾಲ ಬಂತಲ್ಲೋ॥ ಅಯ್ಯೋ ಕಾಲ ಬಂತಲ್ಲೋ ॥೧॥
ಹೆಂಡತಿ ಮಕ್ಕಳ ಹಾರಾಜಿಗ್ಹಚ್ಚೋ ಕಾಲ ಬಂತಲ್ಲೋ
ಕಟ್ಟಿದ ತಾಳಿಯು ಹೊಟ್ಟೆಯು ಪಾಡಿಗೆ ಬಿಚ್ಚಿ ಮಾರಿದಾರೊ॥
ಎತ್ತಿನ ಹೊಟ್ಟೆಗೆ ಮೇವನು ಹಾಕದ ಸಂಕಟ ಬಂತಲ್ಲೊ
ಮೇವು ನೀರು ಕಾಣದ ದನಕರು ಕಟುಕರ ಪಾಲಾಯ್ತೊ॥
ಅಯ್ಯೋ ಕಟುಕರ ಪಾಲಾಯ್ತೊ ।।೨।।
ರಾಯಚೂರು ಜಿಲ್ಲೆಯ ಯಲಬುರ್ಗಾ ತಾಲೂಕಿನ ರಾಜೂರ ಗ್ರಾಮದಲ್ಲಿ।
ಎದೆಯನು ಬಿರಿಯುವ ನೋವಿನ ಘಟನೆ ನಡೆದು ಹೋಯಿತಲ್ಲೊ।
ವಿಧಿಯನೆ ನಂಬಿದ ಬಡ ರೈತನು ತಾ ಸಾಕಿದ ದನಗಳನೊ।
ಹೊಟ್ಟೆಗೆ ಮೇವು ಹಾಕಲು ಆಗದೆ ಬಡಿದ್ಹಾಕಿ ಬಂದಾನೋ।।
ಅಯ್ಯೋ ಬಡಿದ್ಹಾಕಿ ಬಂದಾನೊ ।।೩।।
ಕರುಳಿನ ಸಂಬಂಧ ಕಡಿಯದ ಅವನ ತಿರುಗಿ ಬಂದದಲ್ಲೋ।
ಓಂದಕೆ ಬಂದ ದನಗಳ ನೋಡಿ ಕಣ್ಣೀರ ಇಟ್ಟಾನೋ।
ಹೊಟ್ಯಾನ ಕರಳು ಬಾಯಿಗೆ ಬಂದು ಕತ್ತಲು ಕವಿದಾದೋ।।
ಅಯ್ಯೋ ಕತ್ತಲು ಕವಿದಾದೋ ।।೪।।
ಆತ್ಮೀಯ ದನಕ್ಕೆ ಕೈ ಜೋಡಿಸಿ ಅವ ಶರಣು ಹೇಳಿದಾನೋ।
ಕೈಯಿಗೆ ಸಿಕ್ಕ ಹಗ್ಗವ ತಕ್ಕೊಂಡು ನೇಣು ಏರಿದಾನೊ।
ಶಿವ ಶಿವ ಎನ್ನುತ ಆ ಬಡ ರೈತನು ಪ್ರಾಣವ ಬಿಟ್ಟಾನೋ
ಅಯ್ಯೋ ಪ್ರಾಣವ ಬಿಟ್ಟಾನೋ ।।೫।।

## ಶಿವಬಾಲಯೋಗಿ

ಶಿವ ಲೋಕದಿಂದ ಒಬ್ಬ ಯೋಗಿ ಬಂದಾನವ್ವ।
ಶಿವಯೋಗಿ ಬಂದಾನವ್ವ।
ಯೋಗದಿಂದ ಭೋಗ ಉಂಡ ಜೋಗಿ ಬಂದಾನವ್ವ
ಬಾಲಯೋಗಿ ಬಂದಾನವ್ವ ॥೧॥

ತಿಪ್ಪಾಗೊಂಡನ ಕೆರೆಯು ಬಲಗಡೆಯಲ್ಲಿ
ಬೆಂದಕಾಳೂರಿತ್ತು ಅಲ್ಲಿ ಬೆಂಗಳೂರು ಇತ್ತು ಅಲ್ಲಿ
ಕುಡಿಯುವ ನೀರಿಗೆ ಬರ ಬಂದಿತ್ತಲ್ಲ।
ಅಲ್ಲಿ ಬರ ಬಂದಿತ್ತಲ್ಲ ॥೨॥ ॥ಶಿವ॥

ನಲ್ಲಿಯ ನೀರಿಗೂ ಬಲು ಪರದಾಟ
ಅಲ್ಲಿ ಬಲು ಪರದಾಟ
ಪ್ಯಾಟೆಯ ಜನರ ಗತಿ ಗೋಳಾಟ
ಅವರದು ಅತಿ ಗೋಳಾಟ ॥೩॥ ॥ಶಿವ॥

ಪ್ಯಾಟೆಯ ಜನರೆಲ್ಲಾ ನೀರ ಬೇಡ್ಯಾರವ್ವ
ಅವ್ರು ಬೊಬ್ಬೆ ಹಾಕ್ಯಾರವ್ವ।
ನೀರಿನ ಬದಲು ಸರಕಾರದವ್ರು ಯೋಗಿನ ತಂದಾರವ್ವ
ಒಬ್ಬ ಜೋಗಿನ ತಂದಾರವ್ವ ॥೪॥ ॥ಶಿವ॥

ಸಾಗರದ ಸುಕುಮಾರನ ಲಕ್ಷ್ಮೀಪುತ್ರನವ್ವ
ಅವ ಯೋಗಿ ಭಕ್ತಾನವ್ವ। ಅವ ಜೋಗಿ ಭಕ್ತಾನವ್ವ।
ಚಿಕ್ಕಪೇಟೆಯಿಂದ ಬಂದ ಮಂತ್ರಿ ಮಾನ್ಯನವ್ವ।
ಜನತೆಯ ನಾಯಕನವ್ವ ॥೫॥ ॥ಶಿವ॥

ಬಂದಂಥ ಬಾಲಯೋಗಿ ಕುಂತೇಬಿಟ್ಟಾನವ್ವ
ವರುಣನ ಜಪ ಮಾಡ್ಯಾನವ್ವ। ಮಳೆಗೆ ತಪ ಮಾಡ್ಯಾನವ್ವ।
ಮಂತ್ರಿ ಮಾನ್ಯರು ಜೋಗಿಗೆ ಕೈ ಮುಗಿದಾರವ್ವ
ಜನರು ಅಡ್ಡ ಬಿದ್ದಾರವ್ವ। ॥೬॥

ಹಾಂ ಹ್ರೀಂ ಎಂದು ಜೋಗಿ ತಿಣಕಿ ತಿಣಕ್ಯಾನವ್ವ
ಪಿಳಿ ಪಿಳಿ ಕಣ್ಣು ಬಿಟ್ಟಾನವ್ವ
ಮಳೆರಾಯನ ಹೆಂಡತಿಗವನು ಕಣ್ಣಿಕಿ ನೋಡ್ಯಾನವ್ವ
ಬೆರಳಿನ ಗಣಕಿ ಎಣಿಸ್ಯಾನವ್ವ ॥೭॥

ತಿಪ್ಪಾರಲಾಗ ಹಾಕಿದರೂ ಮಳೆಯೆ ಬರಲಿಲ್ಲವ್ವ
ಅಲ್ಲಿ ಕೆರೆಯೆ ತುಂಬಲಿಲ್ಲ।
ತಿಪ್ಪಗೊಂಡನ ಕೆರೆಯು ತಿಪ್ಪೆಯಾಯಿತವ್ವ
ಜನರು ಸಪ್ಪಗಾದರವ್ವ। ಯೋಗಿ ಬೆಪ್ಪಗಾದನವ್ವ ॥೮॥

# ಕಿತ್ತು ತಿನ್ನುವವರ ಗೀ ಗೀ ಪದ

ಅಯ್ಯೋ ಗೀಯಾ ಗಾಗಿಯ ಗೀಯಾ
ಅಯ್ಯೋ ಗೀಯಾ ಗಾಗಿಯ ಗಾ॥
ಮೊತ್ತ ಬಂತು ಮತ್ತೆ ನೋಡ್ರಿ ಬಿತ್ತಿ ತಿನುವ ಜನಕೆಲ್ಲ
ನಾಡಿಗೆಲ್ಲ ಮಾರಿಯಂತೆ ಬರಗಾಲ ॥ನಮ್ಮ॥
" " " ॥ಅಯ್ಯೋ॥

ಕುಡಿಲಾಕ ನೀರಿಲ್ಲ ತಿನಲಾಕ ಕೂಳಿಲ್ಲ
ಬಡ ಜನರು ಹೊಂಟರೆಪ್ಪ ಗೂಳೆ ಕಟ್ಕೊಂಡು। ಏ
ದನಗಳಿಗೆ ಮೇವಿಲ್ಲ ಜನಗಳಿಗೆ ದುಡಿಮಿಲ್ಲ
ಕೂಲಿ ಜನರು ಅಳ್ತಾರಪ್ಪ ಎದೆ ಬಡ್ಕೊಂಡು ॥೧॥

ಬಡ ಜನರು ಹೋಗುವಾಗ ಕೂಲಿಯವರು ಅಳುವಾಗ
ಸಾವ್ಕರ್ಯಾಕ ನಗ್ತಾನಪ್ಪ ಖುಷಿಯಿಂದ। ಏ
ದನಗಳು ಸಾಯ್ವಾಗ ರೈತರು ನರಳುವಾಗ
ಮಂತ್ರಿಯಾಕ ಮೆರಿತಾನಪ್ಪ ಮೋಜನಿಂದ ॥೨॥

ಬರಗಾಲದ ನೆನಪಾದಾಗ ಇದ್ದ ಬಿದ್ದ ಹಣ ಎತ್ತಿ
ಬಿಳಿ ಟೋಪ್ಗಿಯುವರು ಕಾರುಬಾರ ನಡಸ್ಯಾರಲ್ಲ
ಬಡವರ ಹೆಸರ್ಹೇಳಿ ಇದ್ದೋಟು ಗ್ರ್ಯಾಂಟು ನುಂಗಿ
ಅಧಿಕಾರಿಗಳು ಆಮುಲನಾಗ ತಿರುಗ್ಯಾರಲ್ಲ ॥೩॥

ಭೂಮಿ ಬಾಯಿ ಬಿಡುವಾಗ ಬೆಂಕಿಬಿಸಲು ಸುರಿವಾಗ
ಬಡವರನ್ನು ಬದುಕಿಸುವವರುಇಲ್ಲವೆ ಇಲ್ಲ। ಈ
ದೀಪ ಆರಿ ಹೋಗುವಾಗ ಕತ್ತಲು ಮೈಚಾಚುವಾಗ
ಬೆಳಕ ನೀಡಿ ಕರೆಯುವವರು ಇಲ್ಲವೇ ಇಲ್ಲ ॥೪॥

ಚಿಗರೋ ಗಿಡ ಒಣಗ್ಯಾವೋ ಅರುಳೋ ಹೂವು ಬಾಡ್ಯಾವೋ
ಬಡವರ ಕಷ್ಟ ಕಂಡು ಕಣ್ಣೀರು ಸುರಿಸ್ಯಾವೋ! ಅಯ್ಯೋ
ಹಾರೋ ಹಕ್ಕಿ ನಿಂತಾವ ಕುಣಿತ ನವಿಲು ಬಿಟ್ಟಾವ
ಕೂಲಿ ಜನರ ನೋವು ಕಂಡು ಅಳ್ತಾವಲ್ಲ ॥೫॥

ಕುಂತು ನಿಂತ ಸಭದಾಗ ಕೈ ಮುಗಿದು ಹೇಳತೀವ್ರಿ
ದೇವ್ರು ದಿಂದ್ರು ಶಾಪ ಇದು ಅಲ್ಲವೇ ಅಲ್ಲ
ಕೂಗಿ ಕರೆಯೋ ಕಾಗಿ ಹಂಗ ಕೂಡಿ ತಿನ್ನೊ ಕೋಳಿ
ಹಾಂಗ, ಕೂಡಿ ಬದುಕೋದನ್ನು ನಾವು ಕಲಿಯಲಿಲ್ಲ ॥೬॥

# ತಲೆಗಳು ಉರುಳ್ಯಾವೊ

ತಲೆಗಳು ಉರುಳ್ಯಾವೋ
ರಕ್ತದ ಕೋಡಿ ಹರಿದಾವೋ
ರಾಜಾಧಿರಾಜರ ಅಮಲಿನ ದಾಹಕೆ
ಹೆಣ್ಣು ಹೊನ್ನು ಮಣ್ಣಿನ ಮೋಹಕೆ
ಜನಗಳ ಬಲಿಯಲ್ಲೋ
ರಕ್ತದ ಕೋಡಿ ಹರಿದಾವೊ
ಕತ್ತಿ ಗುರಾಣಿ ಭರ್ಜಿ ಬಿಸಾಕಿ
ಬಾಂಬು ಬಂದೂಕ ಮಾಡ್ಯಾರೋ
ದುಡ್ಡಿನ ಧಣಿಗಳು ಬಡವರ ದೇಶಕೆ
ಕೊಲ್ಲುವ ಕಬ್ಬಿಣ ಮಾರ್ರ್ಯಾರೋ
ತಿನ್ನುವ ಅನ್ನವ ಕಸಿದುಕೊಂಡು
ಕೊಲ್ಲುವ ಕಬ್ಬಿಣ ಮಾರ್ರ್ಯಾರೋ
ಬಡವರ ನಡುವೆ ಯುದ್ಧವ ಹುಟ್ಟಿಸಿ
ಲಾಭ ಮಾಡ್ಯಾರೋ ಅವರು
ಅವರು ಲಾಭ ಮಾಡ್ಯಾರೋ ।।ತಲೆ।।
ಬುಲ್ಲೆಟ್ಟು ಬಾಂಬು ಕಡಿಮೆ ಎಂದು
ಊರೂರು ಕೊಲೆಯೂ ಸಾಲದೆಂದು
ಲೋಕದ ಕೊಲೆಗೆ ಸಜ್ಜಾಗಿ ನಿಂತು
ಬಾಂಬು ಮಾಡ್ಯಾರೋ। ಅಣು। ಪರಮಾಣು
ಪರಮಾಣು ಬಾಂಬು ಮಾಡ್ಯಾರೋ
ಡಾಲರ ಕಣ್ಣಿನ ಗಿಡುಗವ ಕೊಂದು
ಕಾಪಾಡಬೇಕಿದೆ ಜಗವನು ಇಂದು
ಪಾರಿವಾಳಗಳೇ ಎದ್ದೇಳಿ ನೀವು
ಒಂದಾಗಿ ನಿಲ್ಲಿ ಮನುಕುಲಕ್ಕಾಗಿ ।।ತಲೆಗಳು।।

## ನನ ಪತ್ರ ನಿನಗ್ಯಾಕ ಮುಟ್ಟಲಿಲ್ಲ

ದಿಕ್ಕಿಲ್ಲದ ಜೀವಕ್ಕ ದಿಕ್ಕಾಗಿದ್ದೇ ನೀ
ಗಂಜೀಯು ತರಲೆಂದು ದುಡಿಲಾಕ ಹೋದೇ ನೀ
ದೀವಳಿಗಿ ಹಬ್ಬಾಕ ದೀಡು ವರ್ಷವಾಯ್ತು
ಮಗನೇ ನೀ ಇಲ್ಲ, ನಿನ್ನ ಸುದ್ದೀಯು ಸಾರಿಲ್ಲ ಶಿವನೇ॥

ನನ್ನ ಪತ್ರ ನಿನಗ್ಯಾಕ ಮುಟ್ಟಲಿಲ್ಲ ಶಿವನೇ
ನೀ ತಿರುಗಿ ಎಂದ ಪತ್ರ ಬರಿತೀಯೋ ಶಿವನೇ
ಎಷ್ಟು ದಿನ ಅಂತ ದಾರಿ ಕಾಯಲೀ, ಶಿವನೇ
ನೀ, ಬಡಾನೆ ಬರದಾಕೋ ಎಪ್ಪಾ॥

ನಾನೇನು ತಗಣಿಯೋ, ದ್ವಾಮಿಯೋ, ಶಿವನೇ
ಎಲ್ಲಿ ಹೋಗಿ ಸಾಯಲೀ, ನನಯು ಮಗನೇ
ನನ್ನ ಋಣ ಯಾರನ್ನು ಮುಗಿಕಿಲ್ಲೋ ಶಿವನೇ
ನಾ ಇದ್ದೇನು ಮಾಡೋದು ಶಿವನೇ॥

ನಾಯಿ ನರಿಗಳಿಗೂ ಕಡೆಗಾಯ್ತು ಜೀವಾ
ನನಗೆಂದು ಸಾವ ಕೊಡುತ್ತೀಯೋ ದೇವಾ।
ನನ್ನಾಸಿ (ನನ್ನ ಆಯುಷ್ಯ) ಮೊಮ್ಮಗಳಿಗೆ ಬಂದಿರಲಿ ಶಿವನೇ
ನನ್ನ ಗತಿ ಮೊಮ್ಮಗಳಿಗೆ ಕೊಡಬ್ಯಾಡ ಶಿವನೇ।
ಈ ಜೀವ ಸಾಕಾಯ್ತು, ಶಿವನೇ ನನ್ನ ಬೇಗ ನೀಕರಕೊಳ್ಳೋ। ಶಿವನೇ॥

# ನಿನ್ನ ಮಗನ ಕೊಂದರು

ಓ ಗೆಳತಿ ಪ್ಲಾಸೋವ ನಿನ್ನ ಮಗನ ಕೊಂದರು
ಹೋರಾಟದ ಜೀವಿಯನ್ನು ಒಡನಾಡಿ ಬಂಧುವನ್ನು
ನಿನ್ನ ಮಗನ ಕೊಂದರು

ಅವನಂಥ ಪ್ಯೆಕೈಗಳು ಕಟ್ಟಿದಂಥ ಗ್ವಾಡೆ ತಾಪು
ಬಿಸಿಲೇರದ ಬೆಳಗಿನಲ್ಲಿ ನಿನ್ನ ಮಗನ ಕೊಂದರು
ಬೆವರ ಬಸಿದ ಅವನ ಎದೆಗೆ ಗುರಿಯಿಟ್ಟರು
ಗುಂಡಿಕ್ಕಿದರು

ಗುಂಡೊಂದೂ ಕಾಣಲಿಲ್ಲ ಕೊಲೆಗಡುಕರ ಕೆಲಸವೆಲ್ಲ
ಸತ್ತ ಮಗನ ಕಣ್ಣಿನಲ್ಲಿ ಮಿಂಚಿ ಮಾಯವಾಯಿತು
ಹೊರಗಿನವರು ಕೊಲ್ಲಲಿಲ್ಲ ಎಲ್ಲ ಇವನ ಬಂಧು-ಬಳಗ
ನೆರೆಹೊರೆಯವರು

ಸುತ್ತಿದಂಥ ಸರಪಳಿಯಲಿ ಥರಥರಥರ ಎಳೆಯುವಾಗ
ಕ್ರಾಂತಿವೀರರೆಲ್ಲ ಬಂಧು ಮುತ್ತಿಕೊಂಡರು
ಗಿಟುಕಾಸಿದ ಗಿರಣಿಗಳು ಚಿಮಣಿ ಹೊತ್ತು ನಿಂತಿದ್ದೊ
ಅವನ ಕಾಲ ಮಿಂಚಿತ್ತು ಹೊಳೆಯಿತೇನೋ ಮನಸಿಗೆ

ಶೂನ್ಯವಾದ ಗಿರಣಿಗಳಲಿ ದಿನಾದಿನಕ್ಕೂ ಬೆಳೆಯುವಂಥ
ಬೆಟ್ಟದಂಥ ಶಕ್ತಿಯೊಂದು ಕಂಡಿತವನ ಕಣ್ಣಿಗೆ
ತೊಟ್ಟಿಕ್ಕಿತು ಕಣ್ಣೀರು ಹೋದವನು ಮಣ್ಣಿಗೆ

ಓ ಗೆಳತಿ ಪ್ಲಾಸೋವ ನಿನ್ನ ಮಗನ ಕೊಂದರು
ಹೋರಾಟದ ಜೀವಿಯನ್ನು ಒಡನಾಡಿ ಬಂಧುವನ್ನು
ನಿನ್ನ ಮಗನ ಕೊಂದರ

# ಕಲ್ಲು ಮುಳ್ಳಿಗೆ ಹೇಳಲಾ......



ಕಲ್ಲುಮುಳ್ಳಿಗೆ ಹೇಳಲಾ - ನನಗೋಳ
ನಾನೇ ಕಲ್ಲಾಗೋಗಲಾ
ತಂದಾನಿ ತಾನೋ ತಾನಿ ತಂದದನಾನೋ

ನ್ಯಾಯಕ್ಕಾಗಿ ಅವನು ಎದೆ ಎತ್ತಿ ನಿಂತರೆ
ದೇಶದ್ರೋಹಿ ಎಂದು ಜೈಲಾಗೆ ಕುಕ್ಕವರೆ
ಶಾಲೇಗೆ ಮಗನೋದ್ರೆ ನಂಬಾಳು ಬೆಳಕಂತೆ
ಸ್ಕೂಲೀಗೆ ಮಗನೊದ್ರೆ ಕೂಳ್ಯಾರು ಹಾಕ್ತಾರೆ
ಮನೆ ಮುಂದಿ ಎಲ್ಲಾ ಮೈಮುರಿದು ದುಡಿದಾರು
ಉಣ್ಣಾಲು ಒಂದೊತ್ತು ಗಂಜಿಗೂ ಇಲ್ಲವಾಯ್ತು
ಸಾಲ ಸಾಲಂತಾರೆ ಸಾಲ ಬೇಡಂತಾರೆ
ಸಾಲ ಮೂಡದೆ ಹೋದ್ರೆ ಬೇರೆ ಗತಿಯೇ ಇಲ್ಲ
ಮಳೆಗಾಲ ಬಂತಂದ್ರೆ ಮನೆ ಎಲ್ಲಾ ಕೆರೆಯಾಯ್ತು
ಮಲುಗಾಲು ಒಂದಿಷ್ಟು ಜಾಗವೂ ಇಲ್ಲವಾಯ್ತು
ಮೈನೆರೆದ ಮಗಳು ಮನೆಯುಲ್ಲಿದ್ದಾಳೆಂದ್ರೆ
ಊರಗೌಡ ರಾತ್ರಿ ಮನೆಗೆ ಕಳಿಸೂ ಅಂದ
ಕೆರೆಯಲ್ಲಿ ಬೀಳಲ ಕೆರೆಯೆನಾನಾಗಲಾ
ವಿಷವನ್ನು ಕುಡಿಯುಲ ವಿಷವೇ ನಾನಗಲಾ
ಕೆರೆಯಾಗ ಬೀಳಲ್ಲ ವಿಷವನ್ನು ಕುಡಿಯೋಲ್ಲ
ನನ್ನಂಥ ಬಡವರ್ನ ಎಲ್ಲಾರ್ನು ಒಂದ್ಮಾಡಿ
ಸಂಘ ಕಟ್ಟಿ ನಾನು ಹೊರಾಡಿ ಗೆಲ್ಲುವೆನಂ

ಕಲ್ಲುಮುಳ್ಳಿಗೆ ಹೇಳೊಲ್ಲ - ನನ್ನ ಗೋಳು
ನಾನೆ ಕಲ್ಲಾಗೋಗ

# ಸಾವಿರಾರು ನದಿಗಳು

ನೆನ್ನೆ ದಿನ
ನನ್ನ ಜನ
ಬೆಟ್ಟದಂತೆ ಬಂದರು

ಕಪ್ಪು ಮುಖ ಬೆಳ್ಳಿಗೆಡ್ಡ ಉರಿಯುತ್ತಿರಪ ಕಣ್ಣುಗಳು
ಹಗಲು ರಾತ್ರಿಗಳನು ಸೀಳಿ ನಿದ್ದೆಯನ್ನು ಒದ್ದರು
ಕಂಬಳಿಗಳು ಕೊರಗಿದವು ಎದ್ದೇಳುವ ರೊಚ್ಚಿಗೆ
ಭೂಕಂಪನವಾಯಿತು ಅವರು ಕುಣಿದ ಹುಚ್ಚಿಗೆ
ಇರುವೆಯಂತೆ ಹರಿವ ಸಾಲು ಪ್ರತಿಸಿಂಪಪ ದನಿಗಳು
ಧಿಕ್ಕಾರ ಧಿಕ್ಕಾರ ಅಸಮಾನತೆಗೆ
ಎಂದೆಂದಿಗೂ ಧಿಕ್ಕಾರ ಶ್ರೀಮಂತರ ಸೊಕ್ಕಿಗೆ
ಲಕ್ಷಾಂತರ ನಾರುಗಳು ಹುತ್ತ ಬೆಟ್ಟು ಬಂದಂತೆ
ಊರುತುಬ ಪರಿದರು
ಪಾತಾಳಕೆ ಇಳಿದರು
ಆಕಾಶಕೆ ನೆಗೆದರು

ಬೀದಿಯ ಗಲ್ಲಿಯಲ್ಲಿ
ಬೇಲಿಮಳೆಯ ಮರೆಗಳಲ್ಲಿ
ಯಜಮಾನರ ಪಟ್ಟಿಯಲ್ಲಿ ಧಣಿಕೂರುವ ಪಟ್ಟದಲ್ಲಿ
ಎಲ್ಲೆಲ್ಲೂ ನನ್ನ ಜನ ನೀರಿನಂತೆ ನಿಂತರು

ಇಡರು ಬಾಯಿ ಬಿಟ್ಟೊಡನೆ
ಅವರ ಬಾಯಿ ಕಟ್ಟಿತು
ಇವರ ಕಂಠ ಕೇಳಿದೊಡನೆ
ಅವರ ದನಿ ಇಂಗಿತು
ಕ್ರಾಂತಿಯ ಬಿರುಗಾಳಿಯಲ್ಲಿ ಕೈ ಬೀಸಿದ ನನ್ನ ಜನ
ಭಡಿಯು ಏಟು ಹೊಡೆದವರ
ಕುತ್ತಿಗೆಗಳ ಹಿಡಿದರು.

ಪೊಲಿಸರ ದೊಣ್ಣೆಗಳು ಏಜಂಟರ ಕತ್ತಿಗಳು
ವೇದಶಾಸ್ತ್ರ ಪುರಾಣ ಬಂದೂಕದ ಗುಡಾಣ
ತರಗೆಲೆಕಸಕಡ್ಡಿಯಾಗಿ
ತೇಲಿತೇಲಿ ಹರಿದವು
ಹೋರಾಟದ ಸಾಗರಕ್ಕೆ
ಸಾವಿರಾರು ನದಿ

# ಬೆಟ್ಟಗಳ ಒಡೆದೆವು

ಬೆಟ್ಟಗಳಾ ಒಡೆದೆವು
ಬಂಡೆಗಳ ಹಿಂಡಿದೆವು
ನಮ್ಮ ರಕ್ತ ಜಲ್ಲಿಮಾಡಿ
ಪ್ರಾಜೆಕ್ಟು ಕಟ್ಟಿದೆವು
ಶ್ರಮವು ಯಾರಿಗೋ ಸಿರಿಯು ಯಾರಿಗೋ

ನೇಗಿಲುಗಳ ಹಿಡಿದೆವು
ಹೊಲಗಳೆಲ್ಲಾ ಉತ್ತೆವು
ನಮ್ಮ ಬೆವರ ನಾಲೆಮಾಡಿ
ಗದ್ದೆಗಳಿಗೆ ಕಳಿಸಿದೆವು
ಬೆಳೆಯು ಯಾರಿಗೋ ಗಂಜಿ ಯಾರಿಗೋ

ಮಗ್ಗಗಳ ಹಿಡಿದೆವು
ನೂಲುದಾರ ತೆಗೆದೆವು
ನಮ್ಮ ನರಗಳ ದಾರಮಾಡಿ
ಬಟ್ಟೆಗಳ ನೇಯ್ದವು
ಉಡುಪು ಯಾರಿಗೋ ಚಳಿಯು ಯಾರಿಗೋ

ರೇಷ್ಮೆ ಮೊಟ್ಟೆ ತಂದೆವು
ಹುಳುಗಳನ್ನು ಬೆಳೆದೆವು
ರೇಷ್ಮೆದಾರ ತೆಗೆದೆವು
ಸೀರೆ ಪಂಚೆ ನೇಯ್ದವು
ತಳುಕು ಯಾರಿಗೋ ಕೊಳಕು ಯಾರಿಗೋ

ಯಂತ್ರಗಳ ನಡೆಸಿದೆವು
ಉತ್ಪತ್ತಿಯು ಹೆಚ್ಚಿಸಿದೆವು
ನಮ್ಮ ಶಕ್ತಿಯು ಕರೆಂಟು ಮಾಡಿ
ಫ್ಯಾಕ್ಟರಿಯು ನಡೆಸಿದೆವು
ಕಾರು ಯಾರಿಗೋ ಕಾಲು ನಡಿಗೆ ಯಾರಿಗೋ

ಕಾರಣಗಳು ಗೊತ್ತಾಗಿದೆ
ಮುಂದೆ ದಾರಿ ತಿಳಿದಿದೆ
ಕ್ರಾಂತಿದಾರಿಯಲ್ಲಿ ನಡೆದು ನಾವು
ಹೊಸನಾಡನು ಕಟ್ಟುವೆವು
ಹೋರಾಟ ನಮ್ಮದೋ ಜಯವು ನಮ್ಮದೋ

# ಬಿದ್ದಾವು ಮನೆಗಳು

ಬಿದ್ದಾವು ಮನೆಗಳು ಬಿದ್ದಾವು ಹೆಣಗಳು
ಬಿದ್ದಾವು ತೆಂಗಿನ ಗರಿಗಳು । ಅಣ್ಣಯ್ಯ
ಬಡವರ ಸಾವು ಆಯ್ತಲ್ಲೊ

ಗುಡಿಸಲು ಬೀಳುವಾಗ ಬಂಗಲೆ ನಗುತಿದ್ದೊ
ಸಮ್ಮೂರ ಮೋರಿ ಹೆಣ ತುಂಬಿ । ಹರಿಯಿ ತು
ರಕ್ತದ ಕೋಡಿ ಊರೆಲ್ಲಾ

ಮಕ್ಕಳು ಮರಿಗಳು ಬಸರೀರುಬಾಣಂತೀರು
ಇಲಿಗಳ ರೀತೀಲಿ ಚೆಲ್ಲಾಡಿ । ಹೋದರು
ಬಡವರ ಬಂಧುಗಳೆಲ್ಲವರೋ

ಮಡಕೇಗೆ ಕುಡಿಕೇಗೆ ಮನುಷರು ಸಮನಾಗಿ
ಬೀದಿಗೆ ಬಂದು ಬಿದ್ವಲ್ಲೋ । ಈವತ್ತು
ಮಣ್ಣಿನ ಕಣವಾಗಿ ಹೋದ್ವಲ್ಲೋ

ಬಡವರ ಹೆಸರೇಳಿ ಪಟ್ನಕ್ಕೆ ಬಂದೋರು
ಬಡವರ ಚಟ್ಟವ ಕಟ್ಟಿಸಿ । ಮಣ್ಮಾಡಿ
ಗುಡಿಸಲುಗಳನುಂಗಿ ನಗುತಾರಲ್ಲೋ

ತುಳಿಯುವ ಜನರನ್ನು ಸುಮ್ಮನೆ ಬಿಡಲಾರೊ
ಮನೆ ಮನೆ ಮುದಂಲ ಗಿಡದಲಿ । ನಾವೆಲ್ಲ
ಬರುತೀವಿ ಕೆಂಪನೆ ಹೂವಾಗಿ

# ಹೋರಾಟವೆ ದಾರಿ



ಕುಂತ ಮನೆಗಳೆ
ನಿಂತ ಜನಗಳೆ
ಕೇಳದೆ ಹೊಸ ನುಡಿ
ಕಾಣದೆ ಕೆಂಗಿಡಿ
ಹೋರಾಟವೆ ದಾರಿ



ಕೊನೆಗಾಣದ ಬಾಳಿನ ಗೋಳಿಗೆ
ಹೋರಾಟವೆ ದಾರಿ

ಬಿಕ್ಷಾನ್ನಕೆ ಕೈಯನು ಒಡ್ಡುವ
ಕೈಗಳು ಕೊಳೆಯುವವು
ಬೇಡುವ ನೀಡುವ ಜಾಲದಂತ್ಯದಲಿ
ಸೌಖ್ಯದ ನಾಡುದಯ
ಕಪ್ಪು ಕತ್ತಲೆಯ ಕಗ್ಗವಿಯಲ್ಲಿ
ಕೆಂಪು ಬೆಳಕಿನ ಕಿರಣಗಳು
ಸರಪಳಿ ಕಿತ್ತ ಕೆಂಪು ದಾರಿಯಲಿ
ಕೋಟಿ ಕಂಠಗಳ ಸಾಲುಗಳು

ಕುಂತ ಮನೆಗಳೆ
ನಿಂತ ಜನಗಳೆ
ಕೇಳದೆ ಹೊಸ ನುಡಿ
ಕಾಣದೆ ಕೆಂಗಿಡಿ
ಹೋರಟವೆ ದಾರಿ

ಕೊನೆಗಾಣದ ಬಾಳಿನ ಗೋಳಿಗೆ
ಹೋರಾಟವೆ ದಾರಿ

# ಗೆಲುವು ನಮ್ಮದು

ಗೆಲವು ನಮ್ಮದು ಗೆಲವು ನಮ್ಮದು
ಇಂದಿಗೂ ಎಂದೆಂದಿಗೂ ಗೆಲವು ನಮ್ಮದು

ಒಂಟಿ ಒಬ್ಬಂಟಿ ನಾವಲ್ಲ
ಇಂದು ನಾವು ಒಂಟಿ ನೆಡೆಯುವ ಪಯಣಿಗರೇನಲ್ಲಾ
ಇದು ನಮ್ಮ ಎದೆಯಾಳದ ನಿಶ್ಚಲ ನಂಬಿಕೆಯು ॥

ಬದುಕಿನುದ್ದಕ್ಕೂ ಬದ್ದ ವೈರಿಗಳ ಗೆದ್ದೆಗೆಲ್ಲುವೆವು
ಇವೆ ನಮ್ಮ ಎದೆಯಾಳದ ನಿಚ್ಚಲ ನಂಬಿಕೆಯು ॥
ಹೋರಾಟದ ದಾರಿಯೆ ನಮ್ಮನ್ನು ಬಿಡುಗಡೆ ಮಾಡುವುದು
ನಿಮ್ಮನ್ನು ಬಿಡುಗಡೆ ಮಾಡುವುದು
ಇದು ನಮ್ಮ ಎದೆಯಾಳದ ನಿಶ್ಚಲ ನಂಭಿಕೆಯು ॥

# ವಿಶ್ವ ಕ್ರಾಂತಿ ಬಾವುಟ

ವಿಶ್ವ ಕ್ರಾಂತಿ ಬಾವುಟ ದಾಸ್ಯ ಹರಿದ ಬಾವುಟ
ರಕ್ತ ಕ್ರಾಂತಿಯಿಂದ ಹುಟ್ಟಿಬುದ ಕೆಂಪು ಬಾವುಟ
ಕೂಲಿಕಾರ್‍ರ ರಕ್ತದಿಂದ ಹುಟ್ಟಿ ಬಂದ ಬಾವುಟ
ಕೂಲಿಕಾರರನ್ನು ಜಾಗೃತಗೊಳಿಸ ಬಂದ ಬಾವುಟ
ಚಿಕಾಗೋಂದಲ್ಲಿ ಮೊದಲು ಹುಟ್ಟಿಬಂದ ಬಾವುಟ
ಕ್ರಾಂತಿ ಕಾರಿ ಜನರ ಮದ್ಯ ಅಚಲವಾದ ಬಾವುಟ
ಕಾರ್ಲ್ ಮಾರ್ಕ್ಸ್ ತತ್ವವನ್ನು ಅಪ್ಪಿಕೊಂಡ ಬಾವುಟ
ಲೆನಿನ್ ಮಾವೊರಂತ ಕ್ರಾಂತಿ ಪುರುಷರಿಡಿದ ಬಾವುಟ
ಸುಲಿಗೆ ತಡೆಯಲಿಕ್ಕೆ ಸಮರ ಹೊಡಿದಂತ ಬಾವುಟ
ಸಮತಾವಾದ ವಿಜಯಕ್ಕಾಗಿ ಕರೆಕೊಟ್ಟ ಬಾವುಟ
ವಿಶ್ವದ ಕಾರ್ಮಿಕರನ್ನು ಒಂದುಗೂಡಿಸಿದ ಬಾವುಟ
ಜನತೆ ಕ್ರಾಂತಿ ಕರೆಯನಿತ್ತ ಮೇ ದಿನದ ಬಾವುಟ
ಜಿಂದಬಾದ್ ಜಿಂದಬಾದ್ ಇಂಕ್ವಿಲಾಬ್ ಜಿಂದಾಬಾದ್
ಜಿಂದಾಬ್‌ದ್ ಜಿಂದಾಬಾದ್ ಇಂಕ್ವಿಲ್‌ಬ್ ಜಿಂದಾಬಾದ್

# ಹೊಸ ಬಾಳಿನ
# ಹಾಡನು
# ಹಾಡೋಣ

ಸ್ನೇಹಾ ಪ್ರಕಾಶನ ಬೆಲೆ : ರೂ 2-25